ಲಿಖಿತ ಮೂಲಕ ಉತ್ತರಿಸುವ
ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು
ನೂರ ನಲವತ್ತಮೂರನೆಯ ಅಧಿವೇಶನ
ಸೋಮವಾರ, ದಿನಾಂಕ : 01 ನೇ ಫೆಬ್ರುವರಿ, 2021

ಕೋವಿಡ್-19 ನಿಯಂತ್ರಣ ಸಂಬಂಧದ ಬಗ್ಗೆ

ಶ್ರೀ ಸಿ.ಎಂ. ಇಬ್ರಾಹಿಂ (ವಿಧಾನಸಭೆಯಿಂದ ಚುನಾಯಿತರಾದವರು):-

91 (184) ಮಾನ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಕೋವಿಡ್-19 ನಿಯಂತ್ರಣಕ್ಕೆ ಸಂಬಂಧಪಟ್ಟಂತೆ ಕೇಂದ್ರ ಸರ್ಕಾರದಿಂದ ರಾಜ್ಯ ಸರ್ಕಾರಕ್ಕೆ ಇದುವರೆಗೂ ಬಿಡುಗಡೆಯಾಗಿರುವ ಅನುದಾನ ಮತ್ತು ಬಳಕೆಯಾದ ಅನುದಾನ ಎಷ್ಟು ;

(ಆ) ಕೋವಿಶೀಲ್ಡ್ (Covishield) ಕೋವ್ಯಾಕ್ಸಿನ್ (Covaxin) ಲಸಿಕೆಗಳ ತುರ್ತು ಬಳಕೆಗೆ ಅನುಮತಿ ನೀಡಲಾಗಿದ್ದು, ರಾಜ್ಯ ಯಾವ ವ್ಯಾಕ್ಸಿನ್ ಅನ್ನು ಯಾರ್ಯಾರಿಗೆ ನೀಡಲಾಗುತ್ತಿದೆ ಎಂಬ ಬಗ್ಗೆ ಮಾಹಿತಿ ಸಂಗ್ರಹಿಸಿ, ಲಸಿಕೆ ಪಡೆದವರಿಗೆ ಮಾಹಿತಿ ನೀಡಲಾಗುತ್ತಿದೆಯೇ ;

(ಇ) ಎರಡು ಕೋರ್ಸ್‌ಗಳಲ್ಲಿ ನೀಡಲಾಗುವ ಲಸಿಕೆಗಳಲ್ಲಿ ಮೊದಲು ಕೋವಿಶೀಲ್ಡ್ ಲಸಿಕೆಯನ್ನು ನೀಡಿದ ವ್ಯಕ್ತಿಗೆ 2ನೇ ಕೋರ್ಸ್‌ನಲ್ಲಿ ಕೋವ್ಯಾಕ್ಸಿನ್ ಲಸಿಕೆಯನ್ನು ನೀಡಲಾಗುತ್ತಿದೆಯೇ ;

(ಈ) ಅನುಮತಿ ನೀಡಿದ ಲಸಿಕೆಗಳನ್ನು ಪಡೆದ ನಂತರ ಅಡ್ಡ ಪರಿಣಾಮಗಳು ಉಂಟಾಗಿರುವ ಪ್ರಕರಣಗಳೆಷ್ಟು; ಆ ರೀತಿ ಬಂದ ಪ್ರಕರಣಗಳಲ್ಲಿ ಸರ್ಕಾರವು ತಕ್ಷಣಕ್ಕೆ ತೆಗೆದುಕೊಳ್ಳುವ /ತೆಗೆದುಕೊಂಡಿರುವ ಕ್ರಮವೇನು ?